## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1200 |
| ಮಾನ್ಯ ಸದಸ್ಯರ ಹೆಸರು | ಶ್ರೀ. ಎಂ. ಎಲ್ ಅನಿಲ್ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 07.03.2022 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ನಗರಗಳಂತೆ ಗ್ರಾಮೀಣ ಪ್ರದೇಶಗಳಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಿ ದಿನದ 24 ಗಂಟೆಯೂ ಗ್ರಾಮೀಣ ಜನತೆಗೆ ಆರೋಗ್ಯ ಸೇವೆ ನೀಡುವ ಚಿಂತನೆ ಸರ್ಕಾರಕ್ಕಿದೆಯೇ; | ರಾಜ್ಯದ ನಗರಗಳಂತೆ ಗ್ರಾಮೀಣ ಪ್ರದೇಶಗಳಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ದಿನದ 24 ಗಂಟೆಯೂ ಗ್ರಾಮೀಣ ಜನತೆಗೆ ಈಗಾಗಲೇ ಹಲವಾರು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಆರೋಗ್ಯ ಸೇವೆಯನ್ನು ನೀಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಗ್ರಾಮೀಣ ಪ್ರದೇಶದ ಜನತೆ ತಾಲ್ಲೂಕು ಆಸ್ಪತ್ರೆಗಳಿಗೆ ಜಿಲ್ಲಾ ಆಸ್ಪತ್ರೆಗಳಿಗೆ ಅಲೆದಾಡುವುದನ್ನು ತಪ್ಪಿಸುವ ನಿಟ್ಟಿನಲ್ಲಿ ಗ್ರಾಮೀಣ ಆಸ್ಪತ್ರೆಗಳನ್ನು ಉನ್ನತೀಕರಿಸುವ ಯಾವ ಯಾವ ಯೋಜನೆಗಳನ್ನು ಸರ್ಕಾರ ಹಮ್ಮಿಕೊಂಡಿದೆ? (ವಿವರ ನೀಡುವುದು) | ರಾಜ್ಯದ ಗ್ರಾಮೀಣ ಪ್ರದೇಶದ ಜನತೆ ತಾಲ್ಲೂಕು ಆಸ್ಪತ್ರೆಗಳಿಗೆ, ಜಿಲ್ಲಾ ಆಸ್ಪತ್ರೆಗಳಿಗೆ ಅಲೆದಾಡುವುದನ್ನು ತಪ್ಪಿಸುವ ನಿಟ್ಟಿನಲ್ಲಿ ಸರ್ಕಾರವು ಈ ಕೆಳಕಂಡ ಯೋಜನೆಗಳನ್ನು ಜಾರಿಗೊಳಿಸಲಾಗಿದೆ.<br><br>• ರಾಜ್ಯದಲ್ಲಿ 960 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು (24/7) ಮಾದರಿಯಲ್ಲಿ ಸ್ಥಾಪಿಸಲಾಗಿದೆ. ಈ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಆರೋಗ್ಯ ಸೇವೆಗಳ ಜೊತೆಯಲ್ಲಿ, ಶುಶ್ರೂಷಕಿಯರು ದಿನದ 24 ಗಂಟೆ ಹೆರಿಗೆ ಸೌಲಭ್ಯ ಒದಗಿಸುತ್ತಿದ್ದಾರೆ.<br><br>• ರಾಜ್ಯದಲ್ಲಿ 206 ಸಮುದಾಯ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲಾಗಿರುತ್ತದೆ. ಈ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಒಳರೋಗಿ, ಹೊರರೋಗಿ ಹೆರಿಗೆ ಸೌಲಭ್ಯ, ನವಜಾತ ಶಿಶುವಿನ ಆರೈಕೆ, ಕುಟುಂಬ ಯೋಜನೆ ಹಾಗೂ ತುರ್ತು ಸೇವೆಗಳನ್ನು ಒದಗಿಸಲಾಗುತ್ತಿದೆ ಹಾಗೂ ದಿನದ 24 ಗಂಟೆಯೂ ತಜ್ಞ ವೈದ್ಯರ ಸೇವೆಯನ್ನು ಗ್ರಾಮೀಣ ಜನತೆಗೆ ಒದಗಿಸಲಾಗುತ್ತಿದೆ.<br><br>• 22 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳಿಗೆ ಮೇಲ್ದರ್ಜೆಗೇರಿಸುವ ಕಟ್ಟಡ ಕಾಮಗಾರಿಗಳಿಗೆ ಈಗಾಗಲೇ ಅನುಮೋದನೆ ದೊರೆತಿದ್ದು ಪ್ರಕ್ರಿಯೆ ಚಾಲ್ತಿಯಲ್ಲಿದೆ. ಕಾಮಗಾರಿ ಪೂರ್ಣಗೊಂಡ ನಂತರ ಈ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ 24*7 ಆರೋಗ್ಯ ಸೇವೆಗಳು ಲಭ್ಯವಾಗುವುದು. |

ಇ) ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮತ್ತು ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ವೈದ್ಯರುಗಳ ಸಂಖ್ಯೆ ಎಷ್ಟು; ಖಾಲಿ ಇರುವ ವೈದ್ಯರ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

1. **ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ವೈದ್ಯರ ಹುದ್ದೆಗಳ ವಿವರ:**

| ಜಿಲ್ಲೆ | ಪ್ರಾ.ಆ.ಕೇಂದ್ರ ಒಟ್ಟು ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ | | |
|---|---|---|---|---|
| | | ಮಂಜೂರಾತಿ | ಕಾರ್ಯನಿರತ | ಖಾಲಿ |
| ಕೋಲಾರ | 66 | 66 | 66 | 0 |
| ಚಿಕ್ಕಬಳ್ಳಾಪುರ | 57 | 57 | 56 | 01 |

ಸಾರ್ವಜನಿಕರಿಗೆ ತೊಂದರೆಯಾಗದಂತೆ ವೈದ್ಯಾಧಿಕಾರಿ ಹುದ್ದೆ ಖಾಲಿ ಇರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಸಮೀಪದ ಕೇಂದ್ರಗಳಿಂದ ವೈದ್ಯಾಧಿಕಾರಿಗಳನ್ನು ನಿಯೋಜಿಸುವ ಮೂಲಕ ಕ್ರಮ ಕೈಗೊಳ್ಳಲಾಗುತ್ತಿದೆ.

2. **ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿರುವ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ವೈದ್ಯರ ಹುದ್ದೆಗಳ ವಿವರ:**

| ಕೋಲಾರ ಜಿಲ್ಲೆಯ ಸಮುದಾಯ ಆರೋಗ್ಯ ಕೇಂದ್ರ ಸಂಖ್ಯೆ: 02 | | | |
|---|---|---|---|
| ಹುದ್ದೆಗಳ ವಿವರ | ಮಂಜೂರಾತಿ | ಕಾರ್ಯನಿರತ | ಖಾಲಿ |
| ತಜ್ಞರು | 06 | 05 | 01 |
| ದಂತ ವೈದ್ಯರು | 02 | 02 | 00 |
| ಹಿರಿಯ ವೈದ್ಯರು | 02 | 02 | 00 |

ಒಂದು ವರ್ಷದ ಕಡ್ಡಾಯ ಸೇವೆಗೆ ನೇಮಿಸಲಾದ ಒಬ್ಬರು ತಜ್ಞ ವೈದ್ಯರನ್ನು ಸಮುದಾಯ ಆರೋಗ್ಯ ಕೇಂದ್ರ, ಬೇತಮಂಗಲ ಇಲ್ಲಿಗೆ ತಾತ್ಕಾಲಿಕವಾಗಿ ನೇಮಿಸಲಾಗಿದೆ.

| ಚಿಕ್ಕಬಳ್ಳಾಪುರ ಜಿಲ್ಲೆಯ ಸಮುದಾಯ ಆರೋಗ್ಯ ಕೇಂದ್ರ ಸಂಖ್ಯೆ: 02 | | | |
|---|---|---|---|
| ಹುದ್ದೆಗಳ ವಿವರ | ಮಂಜೂರಾತಿ | ಕಾರ್ಯನಿರತ | ಖಾಲಿ |
| ತಜ್ಞರು | 06 | 04 | 02 |
| ದಂತ ವೈದ್ಯರು | 02 | 02 | 00 |
| ಹಿರಿಯ ವೈದ್ಯರು | 02 | 01 | 01 |

- ಸಾರ್ವಜನಿಕ ಆಸ್ಪತ್ರೆ ಚಿಂತಾಮಣಿಯಲ್ಲಿ ಒಬ್ಬರು ಖಾಯಂ ಸ್ತ್ರೀರೋಗ ತಜ್ಞರು ಮತ್ತು ಎನ್‌ಹೆಚ್‌ಎಂ ಅಡಿಯಲ್ಲಿ ಒಬ್ಬರು ಗುತ್ತಿಗೆ ಆಧಾರಿತ ಸ್ತ್ರೀರೋಗ ತಜ್ಞರು ಕಾರ್ಯ ನಿರ್ವಹಿಸುತ್ತಿರುವುದರಿಂದ, ಸಮುದಾಯ ಆರೋಗ್ಯ ಕೇಂದ್ರ, ಬಟ್ಲಹಳ್ಳಿಯಲ್ಲಿನ ಸ್ತ್ರೀರೋಗ ತಜ್ಞತೆ ಹುದ್ದೆಯನ್ನು ಖಾಯಂ ಆಗಿ ಭರ್ತಿ ಮಾಡುವವರೆಗೆ ಸಾರ್ವಜನಿಕ ಆಸ್ಪತ್ರೆ ಚಿಂತಾಮಣಿಯಲ್ಲಿ ಎನ್‌ಹೆಚ್‌ಎಂ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗುತ್ತಿಗೆ ಆಧಾರಿತ ಸ್ತ್ರೀರೋಗ ತಜ್ಞರನ್ನು ತಾತ್ಕಾಲಿಕವಾಗಿ ನೇಮಿಸಲಾಗಿರುತ್ತದೆ.
- ಎಂಬಿಬಿಎಸ್ ಪದವಿ ಪೂರೈಸಿದ ಇಬ್ಬರು ವೈದ್ಯರುಗಳನ್ನು ಸಮುದಾಯ ಆರೋಗ್ಯ ಕೇಂದ್ರ, ಬಟ್ಲಹಳ್ಳಿಗೆ ಒಂದು ವರ್ಷದ ಕಡ್ಡಾಯ ಸರ್ಕಾರಿ ಸೇವೆಗಾಗಿ ನೇಮಿಸಲಾಗಿದೆ.

<table>
<tr>
<td>ಈ)</td>
<td>ಸದರಿ ಜಿಲ್ಲೆಗಳಲ್ಲಿ ಆಂಬುಲೆನ್ಸ್‌ಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆಂಬುಲೆನ್ಸ್‌ಗಳ ಕೊರತೆ ನೀಗಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು)</td>
<td>ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿರುವ ಆಂಬ್ಯುಲೆನ್ಸ್‌ಗಳ ವಿವರ:
<table>
<tr><th>ಜಿಲ್ಲೆ</th><th>ಜನ ಸಂಖ್ಯೆ</th><th>ಜನ ಸಂಖ್ಯೆಗೆ ಅನುಗುಣವಾಗಿ ಅವಶ್ಯಕತೆ ಇರುವ ಆಂಬ್ಯುಲೆನ್ಸ್‌ಗಳ ವಿವರ</th><th>ಇಲಾಖೆಯ ಆಂಬ್ಯುಲೆನ್ಸ್‌ಗಳ ವಿವರ</th><th>108 ಆಂಬ್ಯುಲೆನ್ಸ್‌ಗಳ ವಿವರ</th><th>ಒಟ್ಟು</th><th>ಕೊರತೆ</th></tr>
<tr><td>ಕೋಲಾರ</td><td>16,53,320</td><td>16</td><td>24</td><td>20</td><td>44</td><td>ಇಲ್ಲ</td></tr>
<tr><td>ಚಿಕ್ಕಬಳ್ಳಾಪುರ</td><td>13,50,617</td><td>13</td><td>34</td><td>16</td><td>50</td><td>ಇಲ್ಲ</td></tr>
</table>
ವಿಶ್ವ ಆರೋಗ್ಯ ಸಂಸ್ಥೆಯ ಮಾನದಂಡಗಳನ್ವಯ ಸಮತಟ್ಟು ಪ್ರದೇಶದ 1,00,000 ಜನ ಸಂಖ್ಯೆಗೆ ಒಂದರಂತೆ ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ 70,000 ಜನಸಂಖ್ಯೆಗೆ ಒಂದರಂತೆ ಆಂಬ್ಯುಲೆನ್ಸ್‌ಗಳ ಸೇವೆ ಒದಗಿಸಲಾಗುತ್ತಿದೆ. ಆದರೂ ಕೋವಿಡ್ ನಂತ ತುರ್ತು ಸಂದರ್ಭದಲ್ಲಿ ಹೆಚ್ಚುವರಿ ಆಂಬ್ಯುಲೆನ್ಸ್ ಅವಶ್ಯವಿದ್ದಲ್ಲಿ, ಬಾಡಿಗೆ ಆಧಾರದಲ್ಲಿ ಅಂಬ್ಯುಲೆನ್ಸ ಪಡೆಯಲು ಅವಕಾಶ ಇರುತ್ತದೆ.</td>
</tr>
</table>

**ಆಕುಕ 57 ಎಸ್‌ಎಂಎಂ 2022**

**(ಡಾ|| ಕೆ. ಸುಧಾಕರ್)**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ**
**ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**